# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1290
ಸದಸ್ಯರ ಹೆಸರು : ಶ್ರೀ ಹೆಚ್. ಎಂ. ರಮೇಶ್ ಗೌಡ
ಉತ್ತರಿಸುವ ಸಚಿವರು : ಮಾನ್ಯ ಪೌರಾಡಳಿತ, ತೋಟಗಾರಿಕೆ ಮತ್ತು ರೇಷ್ಮೆ ಸಚಿವರು
ಉತ್ತರಿಸುವ ದಿನಾಂಕ : 17.03.2020

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದ ಅನೇಕ ಕಡೆ ತೆಂಗಿನ ಮರಗಳಿಗೆ ಬಿಳಿ ಹುಳಗಳ ಹಾವಳಿಯಿಂದ ಸಾವಿರಾರು ತೆಂಗಿನ ಮರಗಳು ಒಣಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ ಸರ್ಕಾರ ತೆಗೆದುಕೊಂಡ ಕ್ರಮಗಳೇನು; | ರಾಜ್ಯದ ಅನೇಕ ಕಡೆ ತೆಂಗಿನ ಮರಗಳಿಗೆ ಬಿಳಿಹುಳಗಳ ಹಾವಳಿಯಿಂದ ಬಾಧಿತಗೊಂಡಿರುವುದು ಸರ್ಕಾರದ ಗಮನಕ್ಕೆ ಬಂದಿರುತ್ತದೆ, ಆದರೆ ಮರಗಳು ಒಣಗುವುದಿಲ್ಲ.<br><br>ಸದರಿ ಕೀಟ ಬಾಧೆಯು ತೆಂಗು ಬೆಳೆಯಲ್ಲಿ ಕಳೆದ 3 ವರ್ಷಗಳಿಂದ ಕಂಡು ಬಂದಿದ್ದು, ಕೀಟ ಬಾಧೆಯ ಬಗ್ಗೆ ಜಾಗೃತಿ ಹಾಗೂ ನಿಯಂತ್ರಣ ಕ್ರಮಗಳ ಕುರಿತು ತೆಂಗು ಬೆಳೆಯುವ ಜಿಲ್ಲೆಗಳ ಇಲಾಖಾ ಅಧಿಕಾರಿಗಳಿಗೆ ಹಾಗೂ ರೈತರಿಗೆ ವಿಷಯ ತಜ್ಞರಿಂದ ತರಬೇತಿ ಕಾರ್ಯಕ್ರಮಗಳನ್ನು ಕೈಗೊಳ್ಳಲಾಗಿದೆ. |
| ಆ) | ತೋಟದಿಂದ ತೋಟಕ್ಕೆ ಹರಡುತ್ತಿರುವ ಈ ರೋಗದ ಹತೋಟಿಗೆ ಸರ್ಕಾರ ಕೈಗೊಂಡ ಮಾರ್ಗೋಪಾಯಗಳೇನು; | ಬಿಳಿ ನೊಣ ಕೀಟ ಬಾಧೆ ನಿಯಂತ್ರಣ ಕುರಿತು ಹತೋಟಿ ಕ್ರಮಗಳನ್ನು ಕೈಗೊಳ್ಳಲು ಜಿಲ್ಲಾ ಮತ್ತು ಹೋಬಳಿ ಮಟ್ಟದಲ್ಲಿ ತರಭೇತಿ ಕಾರ್ಯಕ್ರಮಗಳ ಮೂಲಕ ರೈತರಿಗೆ / ಬೆಳೆಗಾರರಿಗೆ ಜಾಗೃತಿ ಮೂಡಿಸಲಾಗಿರುತ್ತದೆ.<br><br>**ಹತೋಟಿ ಕ್ರಮಗಳು:**<br><br>• ಹಳದಿ ಬಣ್ಣದ ಅಂಟು ಬಲೆಗಳ ಅಳವಡಿಕೆ<br>• ಶೇ.0.5 ಬೇವಿನ ಎಣ್ಣೆಯನ್ನು ಸಿಂಪಡಿಸುವುದು<br>• ಬಿಳಿ ಹುಳುಗಳ ಹಾವಳಿಯಿಂದ ಉಂಟಾಗುವ ನಂತರದ ಪರಿಣಾಮವಾದ ಎಲೆಗಳ ಮೇಲೆ ಹರಡಿಕೊಳ್ಳುವ ಸೂಟಿ ಮೋಲ್ಡ್ ಎಂಬ ಶಿಲೀಂಧ್ರವನ್ನು ತೆಗೆಯಲು ಶೇ.1 ರಷ್ಟು ಸ್ಟಾರ್ಚ್ ದ್ರಾವಣವನ್ನು ಸಿಂಪಡಿಸುವುದು.<br>• ಬಿಳಿನೊಣ ಕೀಟ ಬಾಧೆಯನ್ನು ಜೈವಿಕ ಪದ್ಧತಿಯಲ್ಲಿ ಪರಾವಲಂಬಿ *Encarsia Guadeloupe* ಕೀಟದ ಮೂಲಕ ನೈಸರ್ಗಿಕ ನಿಯಂತ್ರಣ ಮಾಡುವುದು<br>• ಬಾಧಿತ ಮರಗಳಿಗೆ ನೀರು ಸಿಂಪಡಣೆ ಮಾಡುವುದು. |
| ಇ) | ತೆಂಗನ್ನು ಉತ್ತೇಜಿಸಲು ಸರ್ಕಾರ ಯಾವ ಕ್ರಮ ಕೈಗೊಂಡಿದೆ? | ತೆಂಗನ್ನು ಉತ್ತೇಜಿಸಲು ಸರ್ಕಾರ ಈ ಕೆಳಕಂಡ ಕ್ರಮಗಳನ್ನು ಕೈಗೊಂಡಿರುತ್ತದೆ.<br>• ಇಲಾಖೆಯ ವಿವಿಧ ಸಸ್ಯಾಗಾರಗಳಲ್ಲಿ ಉತ್ಕೃಷ್ಟ ಗುಣಮಟ್ಟದ ತೆಂಗು ಸಸಿಗಳನ್ನು ಉತ್ಪಾದಿಸಿ ರೈತರಿಗೆ ವಿತರಿಸಲಾಗುತ್ತಿದೆ.<br>• ತೆಂಗು ಅಭಿವೃದ್ಧಿಗಾಗಿ ಪ್ರಾತ್ಯಕ್ಷತೆ ತಾಕುಗಳ ನಿರ್ಮಾಣ |

| | | |
|---|---|---|
| | | ಮತ್ತು ನಿರ್ವಹಣೆ ಮಾಡಲು ರೂ.17,500/ ಪ್ರತಿ ಹೆಕ್ಟೇರ್ ಗೆ ಎರಡು ಕಂತುಗಳಲ್ಲಿ ಸಹಾಯಧನ ಒದಗಿಸಲಾಗುತ್ತಿದೆ.<br>• ತೆಂಗು ಮರುನಾಟಿ ಮತ್ತು ಪುನಃಶ್ಚೇತನ ಕಾರ್ಯಕ್ರಮಕ್ಕೆ ರೂ.44,750/-ಪ್ರತಿ ಹೆಕ್ಟೇರ್ ಗೆ ಸಹಾಯಧನ ಒದಗಿಸಲಾಗುತ್ತಿದೆ.<br>• ತೆಂಗು ಪ್ರದೇಶ ವಿಸ್ತರಣೆಯನ್ನು ಉತ್ತೇಜಿಸಲು ಶೇ.50ರಷ್ಟು ಸಹಾಯಧನ ಒದಗಿಸಲಾಗುತ್ತಿದ<br>• ನೀರಾ ಸಂಸ್ಕರಣ ಘಟಕ ನಿರ್ಮಾಣಕ್ಕೆ ಶೇ.50ರಷ್ಟು ಸಹಾಯಧನ ಒದಗಿಸಲಾಗುತ್ತಿದೆ.<br>• ತೆಂಗು ತೋಟಗಳಿಗೆ ಹನಿ ನೀರಾವರಿ ಅಳವಡಿಕೆಗೆ ಶೇ.90ರಷ್ಟು ಸಹಾಯಧನ ಒದಗಿಸಲಾಗುತ್ತಿದೆ.<br>• ತೆಂಗು ಬೆಳೆಯಲ್ಲಿ ಯಾಂತ್ರೀಕರಣಕ್ಕೆ ಸಣ್ಣ, ಮಧ್ಯಮ, ಮಹಿಳಾ, ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಫಲಾನುಭವಿಗಳಿಗೆ ಶೇ.50ರಷ್ಟು ಹಾಗೂ ಇತರೆ ವರ್ಗದ ಫಲಾನುಭವಿಗಳಿಗೆ ಶೇ.40ರಷ್ಟು ಸಹಾಯಧನ ಒದಗಿಸಲಾಗುತ್ತಿದೆ. |

HORTI 122 HGM 2020

(ನಾರಾಯಣ ಗೌಡ)
ಪೌರಾಡಳಿತ, ತೋಟಗಾರಿಕೆ ಮತ್ತು ರೇಷ್ಮೆ ಸಚಿವರು